## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಸಂಖ್ಯೆ | 284 |
| ಮಾನ್ಯ ಸದಸ್ಯರ ಹೆಸರು | ಶ್ರೀ ಎಸ್. ಎಸ್ ಬೋಸ್ ರಾಜು ( ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 16-07-2019 |
| ಉತ್ತರಿಸಬೇಕಾದ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು |

| ಕ್ರ. ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಯಚೂರಿನಲ್ಲಿ ತಾಯಿ ಮತ್ತು ಮಕ್ಕಳ ಆಸ್ಪತ್ರೆ (ಎಂ.ಸಿ.ಹೆಚ್) ಪ್ರಾರಂಭಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | 2018-19ನೇ ಸಾಲಿನ ಎನ್.ಹೆಚ್.ಎಂ ಯೋಜನೆಯ ಪೂರಕ ಪಿ.ಐ.ಪಿಯಲ್ಲಿ ರಾಯಚೂರು ನಗರದಲ್ಲಿ 60 ಹಾಸಿಗೆಗಳ ಎಂ.ಸಿ.ಹೆಚ್ ಆಸ್ಪತ್ರೆ ನಿರ್ಮಾಣ ಕಾಮಗಾರಿಗೆ ರೂ.1500.00 ಲಕ್ಷಗಳ ಅಂದಾಜು ಮೊತ್ತಕ್ಕೆ ದಿನಾಂಕ:02.01.2019ರಂದು ಅನುಮೋದನೆಯಾಗಿರುತ್ತದೆ. ಸದರಿ ಆಸ್ಪತ್ರೆ ನಿರ್ಮಾಣ ಕಾಮಗಾರಿಯ ಅಂದಾಜು ಪಟ್ಟಿಗೆ ಸರ್ಕಾರದ ಆದೇಶ ಸಂಖ್ಯೆ:ಆಕುಕ 65 ಸಿಜಿಎಂ 2019, ದಿನಾಂಕ:03.07.2019ರ ಪ್ರಕಾರ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿದೆ. |
| ಆ) | ಮಾನ್ವಿ ಪಟ್ಟಣದಲ್ಲಿ ಮಂಜೂರಾಗಿರುವ ತಾಯಿ ಮತ್ತು ಮಕ್ಕಳ ಆಸ್ಪತ್ರೆಯನ್ನು ಯಾವಾಗಿನಿಂದ ಪ್ರಾರಂಭಿಸಲು ಸರ್ಕಾರ ಕ್ರಮ ತೆಗೆದುಕೊಂಡಿದೆ; | ಮಾನ್ವಿ ಪಟ್ಟಣದಲ್ಲಿ ಎಂಸಿಹೆಚ್ ಆಸ್ಪತ್ರೆಯ ನಿರ್ಮಾಣ ಕಾಮಗಾರಿಗೆ ಎನ್‌ಹೆಚ್‌ಎಂ ಯೋಜನೆಯಡಿಯಲ್ಲಿ ರೂ.1100.00 ಲಕ್ಷಗಳ ಅಂದಾಜು ಮೊತ್ತಕ್ಕೆ ಅಧಿಕೃತ ಜ್ಞಾಪನಾ ಸಂಖ್ಯೆ: MD/NHM/AA/1688/2017-18 dated:10.10.2017 ರಂದು ಅಭಿಯಾನ ನಿರ್ದೇಶಕರು, ಎನ್‌ಹೆಚ್‌ಎಂ ಇವರು ಆಡಳಿತಾತ್ಮಕ ಅನುಮೋದನೆ ನೀಡಿರುತ್ತಾರೆ. ಸದರಿ ಕಾಮಗಾರಿಗೆ ನಿಯಮಾನುಸಾರ ಟೆಂಡರ್ ಆಧಾರದ ಮೇಲೆ ಗುತ್ತಿಗೆದಾರರಿಗೆ ದಿನಾಂಕ:05.03.2018 ರಂದು ಕಾರ್ಯಾದೇಶ ನೀಡಿದೆ. ಪ್ರಸ್ತುತ ಸದರಿ ಆಸ್ಪತ್ರೆಯ ಕಟ್ಟಡ ನಿರ್ಮಾಣ ಮತ್ತು ಸಿಬ್ಬಂದಿ ವಸತಿ ನೆಲಹಾಸು ಮತ್ತು ಫಿನಿಶಿಂಗ್ ಕೆಲಸಗಳು ಪ್ರಗತಿಯಲ್ಲಿರುತ್ತದೆ. ಸದರಿ ಕಾಮಗಾರಿಗೆ ಇದುವರೆಗೂ ರೂ.865.32 ಲಕ್ಷಗಳನ್ನು ವೆಚ್ಚ ಮಾಡಲಾಗಿದ್ದು, ಅಗಸ್ಟ್ 2019ರ ಒಳಗೆ ಪೂರ್ಣಗೊಳಿಸಲು ಯೋಜಿಸಲಾಗಿದೆ. |
| ಇ) | ರಾಯಚೂರಿನಲ್ಲಿರುವ ರಾಜೀವ್‌ಗಾಂಧಿ ಸೂಪರ್ ಸ್ಪೆಷಾಲಿಸ್ಟ್ ಆಸ್ಪತ್ರೆಯನ್ನು ರಿಮ್ಸ್‌ನಿಂದ ಬೇರ್ಪಡಿಸಿ ಸ್ವಯತ್ತವಾಗಿ ಕಾರ್ಯನಿರ್ವಹಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ರಾಜೀವ್ ಗಾಂಧಿ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆ(ಓಪೆಕ್)ನ್ನು ರಾಯಚೂರು ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಿಂದ ಬೇರ್ಪಡಿಸಿ ಸ್ವಾಯತ್ತ ಸಂಸ್ಥೆಯನ್ನಾಗಿ ಪರಿವರ್ತಿಸುವ ಯಾವುದೇ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ.. |
| ಈ) | ರಾಯಚೂರು ಜಿಲ್ಲೆಯಲ್ಲಿ ಕ್ಯಾನ್ಸರ್ ಆಸ್ಪತ್ರೆ ಮಂಜೂರಾತಿ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು? | ರಾಯಚೂರು ಜಿಲ್ಲೆಯಲ್ಲಿ ಕ್ಯಾನ್ಸರ್ ಆಸ್ಪತ್ರೆ ಮಂಜೂರಾತಿ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |

ಆಕುಕ 05 ಎಸ್‌ಎಂಎಂ 2019

(ಶಿವಾನಂದ ಎಸ್ ಪಾಟೀಲ)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು

